## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1860
ಸದಸ್ಯರ ಹೆಸರು : ಶ್ರೀ ಕೆ. ಹರೀಶ್ ಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 15-03-2022
ಉತ್ತರಿಸುವ ಸಚಿವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದ ಅಂಗನವಾಡಿ ಸಿಬ್ಬಂದಿಗಳು ತಮ್ಮ ಬೇಡಿಕೆಗಳ ಈಡೇರಿಕೆಗಾಗಿ ಕಳೆದ 5-10 ವರ್ಷಗಳಿಂದ ಧರಣಿಗಳನ್ನು ನಡೆಸುತ್ತಾ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅಂಗನವಾಡಿ ಕಾರ್ಯಕರ್ತೆಯರ ಬೇಡಿಕೆಗಳ ಈಡೇರಿಕೆಗಾಗಿ ಧರಣಿಗಳನ್ನು ನಡೆಸುತ್ತಿರುವುದು. ಸರ್ಕಾರದ ಗಮನಕ್ಕೆ ಬಂದಿದೆ. |
| ಆ. | ಸದರಿ ಸಿಬ್ಬಂದಿಗಳು ಮುಖ್ಯವಾಗಿ ಕನಿಷ್ಠವೇತನಕ್ಕಾಗಿ ಒತ್ತಾಯಿಸಿದ್ದು, ಸರ್ಕಾರ ಸದರಿ ಭರವಸೆಯನ್ನು ಈಡೇರಿಸದಿರಲು ಕಾರಣಗಳೇನು; | ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರು ಕೇಂದ್ರ ಪುರಸ್ಕೃತ ಯೋಜನೆಯಡಿ ಗೌರವಧನ ಸೇವೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವುದರಿಂದ ಹಾಗೂ ಇವರಿಗೆ ಗೌರವಧನ ಪಾವತಿಸಲಾಗುತ್ತಿರುವುದರಿಂದ ಕನಿಷ್ಠ ವೇತನ ಇವರಿಗೆ ಅನ್ವಯಿಸುವುದಿಲ್ಲ. |
| ಇ. | ಸರ್ಕಾರದ ಎಲ್ಲಾ ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ ಮುಂಚೂಣಿಯಲ್ಲಿರುವ ಈ ಅಂಗನವಾಡಿ ಕಾರ್ಯಕರ್ತರ ಬೇಡಿಕೆಗಳನ್ನು ಈಡೇರಿಸಲು ಸರ್ಕಾರ ಕ್ರಮ ಕೈಗೊಳ್ಳುವುದು? | 2022-23ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಅಂಗನವಾಡಿ ಕಾರ್ಯಕರ್ತೆಯರಿಗೆ ನೀಡುತ್ತಿರುವ ಮಾಹೆಯಾನ ಗೌರವಧನವನ್ನು ಸೇವೆಯ ಆಧಾರದ ಮೇರೆಗೆ 20 ವರ್ಷಕ್ಕಿಂತ ಹೆಚ್ಚು ಸೇವೆ ಸಲ್ಲಿಸಿದವರಿಗೆ 1,500 ರೂ., 10-20 ವರ್ಷ ಸೇವೆ ಸಲ್ಲಿಸಿದವರಿಗೆ 1,250 ರೂ. ಮತ್ತು 10ಕ್ಕಿಂತ ಕಡಿಮೆ ವರ್ಷ ಸೇವೆ ಸಲ್ಲಿಸಿದವರಿಗೆ 1,000 ರೂ.ಗಳನ್ನು ಹೆಚ್ಚಿಸಲು ಪ್ರಸ್ತಾಪಿಸಲಾಗಿದೆ.<br>ಇದಲ್ಲದೇ, ಎನ್.ಪಿ.ಎಸ್ ಲೈಟ್ ಯೋಜನೆಯಿಂದ ವಂಚಿತರಾಗಿ ನಿವೃತ್ತಿ ಹೊಂದಿರುವ ಅಂಗನವಾಡಿ ಕಾರ್ಯಕರ್ತೆಯರಿಗೆ ರೂ.50,000/- ಮತ್ತು ಸಹಾಯಕಿಯರಿಗೆ ರೂ. 30,000/- ರಂತೆ ಇಡಿಗಂಟು ಯೋಜನೆಯಡಿಯಲ್ಲಿ ಪಾವತಿಸಲು ಸಹ ಪ್ರಸ್ತಾಪಿಸಲಾಗಿದೆ. |

ಸಂ: ಮಮಇ 117 ಐಸಿಡಿ 2022

Halappa B A

(ಆಚಾರ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಸಚಿವರು.